# ಕರ್ನಾಟಕ ವಿಧಾನ ಪರಿಷತ್ತು

1] ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2121
2] ಮಾನ್ಯ ಸದಸ್ಯರ ಹೆಸರು : ಶ್ರೀ ಅರವಿಂದ ಕುಮಾರ್ ಅರಳಿ
(ವಿಧಾನ ಸಭೆಯಿಂದ ಚುನಾಯಿತರಾದವರು)
3] ಉತ್ತರಿಸುವ ದಿನಾಂಕ : 17.03.2022
4] ಉತ್ತರಿಸುವ ಸಚಿವರು : ಗೃಹ ಸಚಿವರು

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ರಾಜ್ಯ ಪೊಲೀಸ್ ಇಲಾಖೆಯಲ್ಲಿ ಔರಾದ್ಕರ್ ವರದಿಯ ಶಿಫಾರಸ್ಸುಗಳೇನು; (ವಿವರ ನೀಡುವುದು) | **ಅನುಬಂಧ–ಅ ರಲ್ಲಿ ಉತ್ತರಿಸಲಾಗಿದೆ.** |
| ಆ. | ಔರಾದ್ಕರ್ ವರದಿಯ ಶಿಫಾರಸ್ಸಿನಂತೆ ಪರಿಷ್ಕರಣೆಗೊಂಡಿರುವ ವೇತನ ಭತ್ಯೆಗಳಲ್ಲಿ ಹಾಲಿ ಸೇವಾ ನಿರತ ಪೊಲೀಸ್ ಮತ್ತು ಸಿಬ್ಬಂದಿಗಳಿಗೆ ವೇತನ ತಾರತಮ್ಯ ಉಂಟಾಗಿ ಅನ್ಯಾಯವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | **ಅನುಬಂಧ–ಆ ರಲ್ಲಿ ಉತ್ತರಿಸಲಾಗಿದೆ.** |
| ಇ. | ಬಂದಿದ್ದಲ್ಲಿ, ಸದರಿ ತಾರತಮ್ಯವನ್ನು ಸರಿದೂಗಿಸಲು ಸರ್ಕಾರದ ಕೈಗೊಂಡ ಕ್ರಮಗಳೇನು? | |

**ಸಂಖ್ಯೆ: ಹೆಚ್‌ಡಿ 34 ಇಎಫ್‌ಎಸ್ 2022**

[ಆರಗ ಜ್ಞಾನೇಂದ್ರ]
ಗೃಹ ಸಚಿವರು

ಅನುಬಂಧ–'ಅ'

ಕರ್ನಾಟಕ ಪೊಲೀಸ್ ಇಲಾಖೆಯ ವೃಂದದ ಹುದ್ದೆಗಳ ವೇತನ ಶ್ರೇಣಿಗಳಿಗೂ ಇತರೆ ಇಲಾಖೆಯ ವೇತನ ಶ್ರೇಣಿಗಳಿಗಳು ಬಹಳಷ್ಟು ತಾರತಮ್ಯ ಇದ್ದುದರಿಂದ, ಈ ವೇತನ ಶ್ರೇಣಿಯ ತಾರತಮ್ಯವನ್ನು ಸಮತೋಲನಗೊಳಿಸುವುದು ಪೊಲೀಸ್ ಇಲಾಖೆಯ ಸಿಬ್ಬಂದಿಗಳ ಬೇಡಿಕೆಯಾಗಿತ್ತು. ಈ ವೇತನ ಶ್ರೇಣಿ ತಾರತಮ್ಯವನ್ನು ಸಮತೋಲನಗೊಳಿಸುವ ಸಲುವಾಗಿ ಪೊಲೀಸ್ ಅಧಿಕಾರಿ ಮತ್ತು ಸಿಬ್ಬಂದಿಯವರುಗಳ ವೇತನಶ್ರೇಣಿಯ ಪರಿಷ್ಕರಣೆಯ ಕುರಿತು ರಾಜ್ಯ ಸರ್ಕಾರವು, ದಿನಾಂಕ: 28.06.2016 ರಲ್ಲಿ ಶ್ರೀ ರಾಘವೇಂದ್ರ ಔರಾದ್ಕರ್‌ರವರ ಅಧ್ಯಕ್ಷತೆಯಲ್ಲಿ ಸಮಿತಿಯನ್ನು ರಚಿಸಿರುತ್ತದೆ. ಸರ್ಕಾರದ ಆದೇಶದಂತೆ ರಾಘವೇಂದ್ರ ಔರಾದ್ಕರ್ ಸಮಿತಿಯು ಕರ್ನಾಟಕ ರಾಜ್ಯ ಪೊಲೀಸ್ ಇಲಾಖೆಯ ಅಧಿಕಾರಿ ಮತ್ತು ಸಿಬ್ಬಂದಿಯವರುಗಳ ವೇತನ ಪರಿಷ್ಕರಣೆ ಸಂಬಂಧಿಸಿದಂತೆ ಈ ಕೆಳಕಂಡ ಶಿಫಾರಸ್ಸುಗಳೊಂದಿಗೆ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತದೆ;

| Sl. No. | Rank | Existing scale | Proposed scale | Raise in Levels |
|---|---|---|---|---|
| 1 | Follower | 10400-16400 | 11000-19000 | One Level |
| 2 | Jamedar Follower | 11600-21000 | 12500-24000 | Two Levels |
| 3 | Police Constable | 11600-21000 | 12500-24000 | One Level |
| 4 | Head Constable | 12500-24000 | 14550-26700 | Two Levels |
| 5 | Asst. Sub Inspector | 14550-26700 | 20000-36300 | Three Levels* |
| 6 | Police Sub Inspector | 20000-36300 | 22800-43200 | Two Levels |
| 7 | Police Inspector | 21600-40050 | 28100-50100 | Four Levels* |
| 8 | Dy. Supdt. of Police | 28100- 50100 | 30400-51300 | One Level |
| 9 | Superintendent of Police | 36300-53850 | 40050-56550 | Two Levels |

ಶ್ರೀ ರಾಘವೇಂದ್ರ ಔರಾದ್ಕರ್ ಸಮಿತಿಯು ಪೊಲೀಸ್ ಇಲಾಖೆಯ ಅಧಿಕಾರಿ ಮತ್ತು ಸಿಬ್ಬಂದಿಯವರುಗಳ ಸಮವಸ್ತ್ರ ಭತ್ಯೆ, ಸಾರಿಗೆ ಭತ್ಯೆ, ಕಷ್ಟ ಪರಿಹಾರ ಭತ್ಯೆ, ಗಂಡಾಂತರ ಭತ್ಯೆ, ಶ್ರಮದಾನ ಭತ್ಯೆ ಹಾಗೂ ಸದೃಢ ಭತ್ಯೆಗಳನ್ನು ಪರಿಷ್ಕರಣೆ ಮಾಡಲು ಶಿಫಾರಸ್ಸು ಮಾಡಿರುತ್ತದೆ.

-----

## ಅನುಬಂಧ-'ಆ'

**ವೇತನ ಶ್ರೇಣಿ ಪರಿಷ್ಕರಣೆಯ ಅನುಷ್ಠಾನ:**

ಶ್ರೀ ರಾಘವೇಂದ್ರ ಔರಾದ್ಕರ್ ವರದಿಯ ಶಿಫಾರಸ್ಸುಗಳನ್ನು ಭಾಗಶಃ ಅಂಗೀಕರಿಸಿದ ರಾಜ್ಯ ಸರ್ಕಾರವು ಅದೇಶ ಸಂಖ್ಯೆ: ಆಇ/9/ಎಸ್‌ಆರ್‌ಪಿ/2019, ದಿನಾಂಕ: 16.07.2019 ರಲ್ಲಿ ಪೊಲೀಸ್ ಇಲಾಖೆಯ ಅಧಿಕಾರಿ ಮತ್ತು ಸಿಬ್ಬಂದಿಯವರುಗಳ ವೇತನ ಶ್ರೇಣಿಗಳನ್ನು ದಿನಾಂಕ: 01.08.2019 ರಿಂದ ಜಾರಿಗೆ ಬರುವಂತೆ, ಈ ಕೆಳಕಂಡಂತೆ ಪರಿಷ್ಕರಣೆ ಮಾಡಿರುತ್ತದೆ.

| Sl. No. | Rank | Revised Pay Scale (As per 6th Pay Commission) ₹ | Raise in Levels | Total Policemen Benefited |
|---|---|---|---|---|
| 1 | Police Constable | 23,500-47,650 | One Level | 42757 |
| 2 | Head Constable | 27,650-52,650 | Two Level | 27111 |
| 3 | Asst. Sub Inspector | 30,350-58,250 | One Level | 9030 |
| 4 | Police Inspector | 43,100-83,900 | One Level | 1511 |
| 5 | SP (non-IPS) | 70,850-1,07,100 | One Level | 127 |
| | **TOTAL** | | | **80536** |

ಶ್ರೀ ರಾಘವೇಂದ್ರ ಔರಾದ್ಕರ್ ಸಮಿತಿ ವರದಿಯ ಅನುಷ್ಠಾನದಿಂದ ಅನುಯಾಯಿ, ಜಮೇದಾರ್ ಅನುಯಾಯಿ, ಪಿ.ಎಸ್.ಐ ಹಾಗೂ ಪೊಲೀಸ್ ಉಪಾಧೀಕ್ಷಕರುಗಳ ವೇತನ ಶ್ರೇಣಿ ಪರಿಷ್ಕರಣೆಗಳನ್ನು ಹೊರತುಪಡಿಸಿ ಇತರೆ ಎಲ್ಲಾ ವೃಂದದ ಪೊಲೀಸ್ ಅಧಿಕಾರಿ ಮತ್ತು ಸಿಬ್ಬಂದಿಯವರುಗಳ ವೇತನ ಶ್ರೇಣಿಗಳು ಪರಿಷ್ಕರಣೆಯಾಗಿ ಅನುಕೂಲವಾಗಿರುತ್ತವೆ. ಒಟ್ಟಾರೆಯಾಗಿ ಶ್ರೀ ರಾಘವೇಂದ್ರ ಔರಾದ್ಕರ್ ಸಮಿತಿಯ ಶಿಫಾರಸ್ಸುಗಳ ಅನುಷ್ಠಾನದಿಂದ ಪೊಲೀಸ್ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ 84773 ಅಧಿಕಾರಿ ಮತ್ತು ಸಿಬ್ಬಂದಿಯವರುಗಳಿಗೆ ಅನುಕೂಲವಾಗಿದೆ.

ಸರ್ಕಾರದ ಪತ್ರ ಸಂಖ್ಯೆ: ಆಇ 9 ಎಸ್‌ಆರ್‌ಪಿ 2019, ದಿನಾಂಕ: 18.09.2019 ರಲ್ಲಿ ವೇತನ ನಿಗದಿ ಕುರಿತಂತೆ ಹಾಗೂ ಸದರಿ ಪರಿಷ್ಕರಣೆಯು ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಗಳ ನಿಯಮ 43 ರಡಿ ಪುನರ್ ನಿಗದಿಪಡಿಸುವಂತೆ ಸ್ಪಷ್ಟವಾಗಿ ಸೂಚಿಸಲಾಗಿರುತ್ತದೆ.

ಸಾಮಾನ್ಯವಾಗಿ ಒಂದು ಹುದ್ದೆಯ ವೇತನ ಶ್ರೇಣಿಯನ್ನು ಮೇಲ್ದರ್ಜೆಗೇರಿಸಿದಾಗ ಮತ್ತು ವೇತನ ಪರಿಷ್ಕರಣೆಯ ಸಂದರ್ಭಗಳಲ್ಲಿ ರಾಜ್ಯ ಸರ್ಕಾರಿ ನೌಕರರ ವೇತನವನ್ನು ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಗಳ ನಿಯಮ 43 ರಲ್ಲಿನ ಅವಕಾಶಗಳ ಪ್ರಕಾರ ಪುನರ್ ನಿಗದಿಪಡಿಸಬೇಕಾಗಿರುತ್ತದೆ. ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಗಳ ನಿಯಮ 43ರ ಉದ್ಧೃತ ಭಾಗ ಈ ಕೆಳಕಂಡಂತೆ ಇದೆ.

...2

ಕೆ.ಸಿ.ಎಸ್.ಆರ್ ನಿಯಮ 43: ವೇತನ ಬದಲಾವಣೆಯಾದ ಹುದ್ದೆಯನ್ನು ಹೊಂದಿದವನು, ಒಂದು ಹೊಸ ಹುದ್ದೆಗೆ ಹೊಸ ವೇತನದ ಮೇಲೆ ವರ್ಗಾಯಿಸಲ್ಪಟ್ಟಿದ್ದಾನೆಂದು ತಿಳಿಯತಕ್ಕದ್ದು, ಆದರೆ ಅವನು ತನ್ನ ಹಳೆಯ ವೇತನ ಶ್ರೇಣಿಯನ್ನು ಮುಂದಿನ ಅಥವಾ ಆ ಹುದ್ದೆಯನ್ನು ಬಿಡುವವರೆಗೆ ಅಥವಾ ಕಾಲಿಕ ವೇತನ ಶ್ರೇಣಿಯಲ್ಲಿ ತನ್ನ ವೇತನ ಪಡೆಯುವುದು ನಿಲ್ಲುವವರೆಗೆ ತನ್ನ ಹಳೆಯ ವೇತನವನ್ನು ಉಳಿಸಿಕೊಳ್ಳಲು ಇಚ್ಛೆಯನ್ನು ವ್ಯಕ್ತಪಡಿಸಬಾರದು, ಹಾಗೆ ಒಮ್ಮೆ ವ್ಯಕ್ತಪಡಿಸಿದ ಇಚ್ಛೆಯು ಅಂತಿಮವಾಗಿರುತ್ತದೆ.

ಟಿಪ್ಪಣಿ: ಒಂದು ಹೊಸ ಕಾಲಿಕ ವೇತನ ಶ್ರೇಣಿಯು ಜಾರಿಗೆ ಬರುವುದಕ್ಕೆ ನಿಕಟಪೂರ್ವದಲ್ಲಿದ್ದ ಒಂದು ಕೇಡರ್ ಅಥವಾ ವರ್ಗದ ಹುದ್ದೆಯನ್ನು ಮೂಲತ:ಹೊಂದಿದ್ದ ಅಥವಾ ಅದರಲ್ಲಿ ಸ್ಥಾನಪನ್ನ ಕೆಲಸ ಮಾಡಿದ ಸರ್ಕಾರಿ ನೌಕರನು ಅ ಅವಧಿಯಲ್ಲಿ ಹೊಸ ಕಾಲಿಕ ವೇತನ ಶ್ರೇಣಿಯ ಒಂದು ಹಂತಕ್ಕೆ ಸಮಾನವಾದ ಅಥವಾ 2 ಹಂತಗಳ ನಡುವಿನ ವೇತನವನ್ನು ಅಥವಾ ಸಂಬಳನ್ನು ಪಡೆದಿದ್ದರೆ, ಹೊಸ ವೇತನ ಶ್ರೇಣಿಯಲ್ಲಿ ಅಥವಾ ಆರಂಭದ ವೇತನ ಅಥವಾ ಸಂಬಳವನ್ನು ಅವನು ಹಿಂದೆ ಕೊನೆಯ ಸಲ ಪಡೆದ ವೇತನ ಅಥವಾ ಸಂಬಳದ ಆಧಾರದ ಮೇಲೆ ನಿಗದಿಮಾಡತಕ್ಕದ್ದು.

ಪ್ರಸ್ತುತ ಮೇಲ್ದರ್ಜೆಗೇರಿಸಲ್ಪಟ್ಟ ವೇತನ ಶ್ರೇಣಿಗಿಂತ ಮೂಲವೇತನ ಕಡಿಮೆಯಿರುವ ಪೋಲೀಸ್ ಅಧಿಕಾರಿ/ಸಿಬ್ಬಂದಿಗಳಿಗೆ ಮಾತ್ರ ವೇತನ ಬಡ್ತಿ ದೊರೆಯುತ್ತದೆ.

ಆದರೆ, ಸೇವೆಯಲ್ಲಿರುವವರು ಈ ವೇತನ ಶ್ರೇಣಿಯನ್ನು ಈಗಾಗಲೇ ತಲುಪಿರುವುದರಿಂದ ಮೂಲವೇತನವು ಮೇಲ್ದರ್ಜೆಗೇರಿಸಲ್ಪಟ್ಟ ವೇತನ ಶ್ರೇಣಿಗೆ ಸಮತೋಲನವಾಗುತ್ತದೆ.

ಹೊಸದಾಗಿ ಕರ್ತವ್ಯಕ್ಕೆ ವರದಿ ಮಾಡಿಕೊಂಡ ಸಿಬ್ಬಂದಿಗಳಿಗೆ ಮೂಲವೇತನ ಮೇಲ್ದರ್ಜೆಗೇರಿಸಲ್ಪಟ್ಟ ವೇತನಶ್ರೇಣಿಯಂತೆ ನಿಗದಿಯಾಗಲಿದ್ದು, ಆರ್ಥಿಕ ಲಾಭವಾಗುತ್ತದೆ.

ಆದ್ದರಿಂದ ಮೇಲ್ಕಂಡ ನಿಯಮಗಳಾನುಸಾರ ಹಾಗೂ ಸರ್ಕಾರದ ನಿರ್ದೇಶನಗಳನ್ವಯ ಪೋಲೀಸ್ ಇಲಾಖೆಯ ಬಹುತೇಕ ಅಧಿಕಾರಿ ಮತ್ತು ಸಿಬ್ಬಂದಿಯವರುಗಳ ವೇತನ ಶ್ರೇಣಿಗಳನ್ನು ಮೇಲ್ದರ್ಜೆಗೇರಿಸಿ ಕ್ರಮ ಕೈಗೊಳ್ಳಲಾಗಿದೆ.

-----